# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 732(861)**
**ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ)**
**ಉತ್ತರಿಸುವ ದಿನಾಂಕ : 20-09-2021**
**ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಆರ್ಥಿಕ ಇಲಾಖೆಯಿಂದ ಅನುಮತಿ ಪಡೆದಿದ್ದು ಕೊರೋನಾ ಕಾರಣಕ್ಕಾಗಿ ತಡೆಹಿಡಿಯಲಾಗಿದ್ದ ಅನುದಾನಿತ ಪ್ರೌಢ ಶಾಲೆಗಳಲ್ಲಿ 2015ರ ರವರೆಗೆ ತೆರವಾದ ಹುದ್ದೆಗಳ ಪೈಕಿ ಈಗಾಗಲೇ ಹುದ್ದೆ ಮಂಜೂರು ಪಡೆದುಕೊಂಡಿರುವ ಹುದ್ದೆಗಳಿಗೆ ಮಾತ್ರ ನೇಮಕಾತಿಗೆ ಅವಕಾಶ ನೀಡಿ. ಹುದ್ದೆ ಮಂಜೂರು ಪಡೆದುಕೊಳ್ಳಲು ಸಲ್ಲಿಸಿದ ಕಡತಗಳನ್ನು ಆಯುಕ್ತರ ಕಛೇರಿಯಲ್ಲಿ ಬಾಕಿ ಇಡಲಾಗಿದ್ದು, ಆರು ವರ್ಷಗಳ ಹಿಂದೆ ತೆರವಾದ ಹುದ್ದೆಗಳನ್ನು ತುಂಬಲು 15 ವರ್ಷಗಳು ಬೇಕಾಗಬಹುದು ಎಂಬ ವಿಚಾರ ಸರ್ಕಾರದ ಗಮದಲ್ಲಿದೆಯೇ; | ಮಂಜೂರಾತಿ ಪ್ರಕ್ರಿಯೆ ನಡೆಯುತ್ತಿದೆ. |
| ಆ | ಹಾಗಾದಲ್ಲಿ, ಅನುದಾನಿತ ವಿದ್ಯಾ ಸಂಸ್ಥೆಗಳ ಮತ್ತು ಅಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳ ಭವಿಷ್ಯದ ಹಿತದೃಷ್ಟಿಯಿಂದ ಅಗತ್ಯ ಕ್ರಮ ಕೈಗೊಳ್ಳುವುದು ಸರ್ಕಾರದ ಆದ್ಯ ಕರ್ತವ್ಯವಲ್ಲವೇ; | ಹೌದು |
| ಇ | 2015ರವರೆಗೆ ಅಂದರೆ 6 ವರ್ಷಗಳ ಹಿಂದೆ ಅನುದಾನಿತ ಪ್ರೌಢ ಶಾಲೆಗಳಲ್ಲಿ ತೆರವಾದ ಹುದ್ದೆಗಳನ್ನು ಇನ್ನೂ ತುಂಬದಿದ್ದರೆ ಹಲವಾರು ವರ್ಷಗಳಿಂದ ತಮ್ಮ ಜೀವನವನ್ನೇ ಮುಡಿಪಾಗಿಟ್ಟು ದುಡಿಯುತ್ತಿರುವ ಶಿಕ್ಷಕರು ವಯೋಮಿತಿ ಮೀರಿ, ಶಾಶ್ವತವಾಗಿ ನೇಮಕಾತಿ ಅವಕಾಶವನ್ನು ಕಳೆದುಕೊಳ್ಳುವುದು ಸರ್ಕಾರದ ಗಮನದಲ್ಲಿದೆಯೇ; ಹಾಗಿದ್ದಲ್ಲಿ, ಇದರ ಬಗ್ಗೆ ಸರ್ಕಾರ ಸೂಕ್ತ ಪರಿಹಾರ ಒದಗಿಸುವ ನಿಟ್ಟಿನಲ್ಲಿ ತೆಗೆದುಕೊಂಡ ನಿರ್ಣಯಗಳೇನು? | ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8 ದಿನಾಂಕ 10-06-2020ರಲ್ಲಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವ ಪ್ರಸ್ತಾವನೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡದಿರಲು ನಿರ್ದೇಶನ ನೀಡಲಾಗಿದೆ.<br><br>ಆದರೆ, ದಿನಾಂಕ:31-12-2015ರ ಪೂರ್ವದಲ್ಲಿ ನಿವೃತ್ತಿ , ನಿಧನ, ರಾಜೀನಾಮೆ ಮತ್ತು ಇತರೆ ಕಾರಣಗಳಿಂದ ಖಾಲಿಯಿರುವ ಹುದ್ದೆಗಳ ಪೈಕಿ ಈಗಾಗಲೇ ಇಲಾಖೆಯಿಂದ ಅನುಮೋದನೆಗೊಂಡು ನೇಮಕಾತಿ ಪ್ರಕ್ರಿಯೆಯು ಇಲಾಖೆಯ ಹಂತದಲ್ಲಿ ಬಾಕಿಯಿರುವ ಅನುದಾನಿತ ಪ್ರೌಢಶಾಲೆಯ 257 ಬೋಧಕ ಹುದ್ದೆಗಳನ್ನು ಹಾಗೂ ಅನುದಾನಿತ ಪದವಿ ಪೂರ್ವ ಕಾಲೇಜುಗಳ 173 ಬೋಧಕ ಹುದ್ದೆಗಳಿಗೆ 2021-22ನೇ ಶೈಕ್ಷಣಿಕ ವರ್ಷ ಪ್ರಾರಂಭಗೊಂಡ ನಂತರ ನೇಮಕಾತಿ ಆದೇಶವನ್ನು ನೀಡಲು ಆರ್ಥಿಕ ಇಲಾಖೆ ಸಹಮತಿ ನೀಡಿದ್ದು, ಅದರನ್ವಯ ಕ್ರಮವಹಿಸಲು ಅನುಮೋದನೆ ನೀಡಲಾಗಿದೆ. |

| | | |
|---|---|---|
| | | ಮುಂದುವರೆದು ಈ ಹಿಂದೆ ಸಹಮತಿ ನೀಡಿದ್ದ ಒಟ್ಟು ಪ್ರೌಢಶಾಲೆಗಳ ಹುದ್ದೆಗಳ ಪೈಕಿ 257ರ ಬದಲು ಒಟ್ಟು-2181 ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಬಾಕಿ ಉಳಿದಿದ್ದು, ಅವುಗಳನ್ನು ಸಹ ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿದೆ. |

ಇಪಿ 334 ಎಸ್‌ಇಎಸ್ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು